KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮಾರ್ಚ್ ೫, ೨೦೦೯ (ಫಾಲ್ಗುಣ ೧೪, ಶಕ ವರ್ಷ ೧೯೩೦) | ಸಂಚಿಕೆ ೧೦ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು, ಭೂಯ್ಯಾರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೇಲೂರು(ಕೆ) ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 06/10/2008ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ ಬಿಜೆಪಿ/ಭೂಸ್ವಾಪ್ರ/2008–09/5433.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ದಿನಾಂಕ 06/10/2008ರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಭೂಯ್ಯಾರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೇಲೂರು(ಕೆ) ಗ್ರಾಮದ ಜಮೀನುಗಳಿಗೆ ಗುಲ್ಬರ್ಗಾದ 3ನೇ ಹೆಚ್ಚುವರಿ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 05/02/2004.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 20/08/2005

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾದ 3ನೇ ಹೆಚ್ಚುವರಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 278 ಎಲ್‌ಎಸಿ(ಎಲ್‌ಸಿ) 2007, ದಿನಾಂಕ 31/01/08ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಬೇಲೂರ(ಕೆ) ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 195/06 | 90/3 | 0–16 | 34856 |
| 2 | 196/06 | 81/2 | 1–05 | 97188 |
| 3 | 197/06 | 72/3 | 0–07 | 15118 |
| 4 | 198/06 | 81/2/2 | 0–20 | 64994 |
| 5 | 199/06 | 96/3 | 0–16 | 34556 |
| | | | **ಒಟ್ಟು** | **247688** |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 136 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 17ನೇ ಜನವರಿ 2009.**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಭೂಯ್ಯಾರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಬೇಲೂರು(ಕೆ) ಗ್ರಾಮದ ಪ್ರಸ್ತಾವನೆಯಲ್ಲಿ ನಮೂದಿಸಿದ ಸ.ನಂ.ಗಳಿಗೆ ಸೇರಿದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.2,47,688–00ಗಳನ್ನು (ಎರಡು ಲಕ್ಷದ ನಲವತ್ತೇಳು ಸಾವಿರದ ಆರು ನೂರ ಎಂಭತ್ತೆಂಟು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ:02/09/2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.392

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಯುವಜನ ಸೇವಾ ಸಚಿವಾಲಯ**

**ಪುನರ್ ತಿದ್ದುಪಡಿ**

**ಸಂಖ್ಯೆ: ಯುಸೇಇ 14 ಸಮನ 09, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2009.**

ಸರ್ಕಾರಿ ಅದೇಶ ಸಂಖ್ಯೆ: ಸಿಆಸುಇ 42 ಸಸಿವಿ 2006, ದಿನಾಂಕ 18–5–2006ರಲ್ಲಿ ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳನ್ನು ಪುನರ್ ಸಂಘಟಿಸಿರುವ ಹಿನ್ನಲೆಯಲ್ಲಿ, ಸಂ: ವಾಪ್ರಯು 90 ಸಮನ 05(ಭಾ) ದಿನಾಂಕ 29–7–05ರಲ್ಲಿ 2005ರ ಮಾಹಿತಿ ಹಕ್ಕು ಕಾಯ್ದೆ (2005 ಕೇಂದ್ರ ಕಾಯ್ದೆ ಸಂಖ್ಯೆ 22) ಸೆಕ್ಷನ್ 5(1), 5(2) ಹಾಗೂ 19(1)ರಡಿಯಲ್ಲಿ ವಾರ್ತಾ ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಗೆ ಸಂಬಂಧಿಸಿದಂತೆ ಯುವಜನ ಸೇವಾ ಇಲಾಖೆಗೆ ಸಂಬಂಧಿಸಿದಂತೆ ಹೊರಡಿಸಿದ ತಿದ್ದುಪಡಿ ಆದೇಶ ಸಂಖ್ಯೆ: ವಾಪ್ರಾಯು 90 ಸಮನ 05 ದಿನಾಂಕ 31–5–2006 ಅನ್ನು ಮಾರ್ಪಡಿಸಿದ್ದು ಈ ಕೆಳಗಿನಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಸರ್ಕಾರದ ಅಪರ ಕಾರ್ಯದರ್ಶಿ/ಸಹ ಕಾರ್ಯದರ್ಶಿ/
ಉಪ ಕಾರ್ಯದರ್ಶಿ –ಸಾರ್ವಜನಿಕ ಮಾಹಿತಿ ಅಧಿಕಾರಿ
ಯುವಜನ ಸೇವಾ ಇಲಾಖೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 602

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು, ಓಕಳಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ವರನಾಳ ಗ್ರಾಮ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 06/10/2008ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ ಬಿಜೆಪಿ/ಭೂಸ್ವಾಪ್ರ/2008-09/5432.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ದಿನಾಂಕ 06/10/2008ರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಓಕಳಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ವರನಾಳ ಗ್ರಾಮದ ಜಮೀನುಗಳಿಗೆ ಗುಲ್ಬರ್ಗಾ 2ನೇ ಹೆಚ್ಚುವರಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 11/03/2004.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 01/07/2005

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾ 2ನೇ ಹೆಚ್ಚುವರಿ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 271 ಎಲ್‌ಎಸಿ(ಎಲ್‌ಸಿ) 2007, ದಿನಾಂಕ 31/01/2008ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ವರನಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 212/06 | 62/2 | 2-05 | 2,98,218-00 |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 118 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 17ನೇ ಜನವರಿ 2009.**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಓಕಳಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ವರನಾಳ ಗ್ರಾಮದ ಪ್ರಸ್ತಾವನೆಯಲ್ಲಿ ನಮೂದಿಸಿದ ಸ.ನಂ.ಗಳಿಗೆ ಸೇರಿದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.2,98,218-00ಗಳನ್ನು (ಎರಡು ಲಕ್ಷದ ತೊಂಭತ್ತೆಂಟು ಸಾವಿರದ ಇನ್ನೂರ ಹದಿನೆಂಟು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008-09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ:02/09/2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.394

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಳ್ಳಾರಿ ಜಿಲ್ಲೆ, ಹೆಚ್.ಬಿ.ಹಳ್ಳಿ ತಾಲ್ಲೂಕು ಬೆಣಕಲ್ ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣ ಠೇವಣಿ ಮಾಡುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 17/10/2008ರ ಪತ್ರ ಸಂ:ಸನೀ(ಉ)ವ/ಬಿಜೆಪಿ/ಭೂಸ್ವಾಪ್ರ/2008–09/ 5564.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 17/10/2008 ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬಳ್ಳಾರಿ ಜಿಲ್ಲೆ, ಹೆಚ್.ಬಿ.ಹಳ್ಳಿ ತಾಲ್ಲೂಕು, ಬೆಣಕಲ್ ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಬೆಣಕಲ್ ಗ್ರಾಮದ ಸರ್ವೆ ನಂಬರ್‌ಗಳಿಗೆ ಸೇರಿದ 46 ಎಕರೆ 47 ಗುಂಟೆ ಜಮೀನಿನ ಸ್ವಾಧೀನಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆ ಕೈಗೊಳ್ಳಲು ಪ್ರತಿ ಎಕರೆಗೆ ರೂ.25,000/–ಗಳಂತೆ ಒಟ್ಟು ಮೊತ್ತ ರೂ16.88ಲಕ್ಷಗಳಾಗುತ್ತಿದ್ದು, ಇದರಲ್ಲಿ ಈಗಾಗಲೇ ಠೇವಣಿ ಮಾಡಿರುವ ರೂ.11.86ಲಕ್ಷಗಳನ್ನು ಹೊರತುಪಡಿಸಿ ಉಳಿದ ಮೊತ್ತ 5,02,327–00 ರೂ.ಗಳನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಲು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಕಂದಾಯ ಇಲಾಖೆಯ ಸುತ್ತೋಲೆ ಸಂಖ್ಯೆ:ಕಂಇ 42 ಭೂಸ್ವಾಹಾ 2000, ದಿನಾಂಕ 08/10/2001 ರಲ್ಲಿ ಸೂಚಿಸಿರುವಂತೆ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಸಂಭವನೀಯ ವೆಚ್ಚದ ಶೇ.50ರಷ್ಟನ್ನು ಮುಂಗಡ ಹಣವಾಗಿ ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಬೇಕಾಗಿದ್ದು, ಈಗಾಗಲೇ 11.86 ಲಕ್ಷ ರೂ.ಗಳನ್ನು ಠೇವಣಿ ಮಾಡಿರುವುದರಿಂದ, ಉಳಿದ ಮೊತ್ತವನ್ನು ಠೇವಣಿ ಮಾಡಬೇಕಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 149 ಭೂಸ್ವಾಪ್ರ 2008, ಬೆಂಗಳೂರು ದಿನಾಂಕ 17ನೇ ಜನವರಿ 2009.**

ಪ್ರಸ್ತಾವನೆಯನ್ನು ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬಳ್ಳಾರಿ ಜಿಲ್ಲೆ, ಹೆಚ್.ಬಿ.ಹಳ್ಳಿ ತಾಲ್ಲೂಕಿನ ಬೆಣಕಲ್ ಗ್ರಾಮದ ಸರ್ವೆ ನಂಬರ್‌ಗಳಿಗೆ ಸೇರಿದ 46 ಎಕರೆ 47 ಗುಂಟೆ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ರೂ.5,02,327–00 (ಐದು ಲಕ್ಷದ ಎರಡು ಸಾವಿರದ ಮುನ್ನೂರ ಇಪ್ಪತ್ತೇಳು ರೂ.ಗಳು ಮಾತ್ರ)ಗಳನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ 02/09/2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.395

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣದಲ್ಲಿ ಸ್ವಾಧೀನಪಡಿಸಿಕೊಳ್ಳಲಾದ ಮದಲಗಟ್ಟಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 13/11/2008ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ ಭೂಸ್ವಾಪ್ರ/2008–09/6014.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮದಲಗಟ್ಟಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಪ್ರಕರಣದ ವಿವರಗಳು ಈ ಕೆಳಕಂಡಂತಿವೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 03/10/1996
- ಪರಿಹಾರ ಧನದ ಐತೀರ್ಪಿನ ದಿನಾಂಕ 09/06/1999

ಭೂಸ್ವಾಧೀನಕ್ಕೊಳಪಟ್ಟ ಕೆಲವು ಸರ್ವೆ ನಂಬರ್‌ಗಳ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೆಚ್ಚಿನ ಪರಿಹಾರಕ್ಕಾಗಿ ಕೊಪ್ಪಳದ ಸಿವಿಲ್ ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರಕ್ಕೆ ಆದೇಶ ಪಡೆದುಕೊಂಡಿದ್ದಾರೆ. ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 2134 ಎಲ್‌ಎಸ್‌ಪಿ 2006, ದಿನಾಂಕ 24/04/2007ರಲ್ಲಿ ನಿರ್ಧರಿಸಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಸಂಖ್ಯೆ | ಮದಲಗಟ್ಟಿ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 16/01 | 6/2 | 2–36 | 848992 |
| | | 6/4 | 1–17 | 416931 |
| 2 | 17/01 | 6/3ಎ | 2–34 | 834363 |
| 3 | 18/01 | 6/3ಎ | 2–34 | 834363 |
| 4 | 19/01 | 6/5 | 1–10 | 366229 |
| | ಒಟ್ಟು | | | 3300878 |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 151 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 16ನೇ ಜನವರಿ 2009.**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣದಲ್ಲಿ ಸ್ವಾಧೀನಪಡಿಸಿಕೊಂಡ ಮದಲಗಟ್ಟಿ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.33,00,878–00ಗಳನ್ನು (ಮೂವತ್ತ್ಮೂರು ಲಕ್ಷದ ಎಂಟುನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ:22.09.2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 396

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣದಲ್ಲಿ ಸ್ವಾಧೀನಪಡಿಸಿಕೊಳ್ಳಲಾದ ಬ್ಯಾಲಿಹಾಳ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 13/11/2008ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ ಭೂಸ್ವಾಪ್ರ/2008–09/6015.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬ್ಯಾಲಿಹಾಳ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಪ್ರಕರಣದ ವಿವರಗಳು ಈ ಕೆಳಕಂಡಂತಿವೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 31/10/1996
- ಪರಿಹಾರ ಧನದ ಐತೀರ್ಪಿನ ದಿನಾಂಕ 09/06/1999

ಭೂಸ್ವಾಧೀನಕ್ಕೊಳಪಟ್ಟ ಕೆಲವು ಸರ್ವೆ ನಂಬರ್‌ಗಳ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೆಚ್ಚಿನ ಪರಿಹಾರಕ್ಕಾಗಿ ಕೊಪ್ಪಳದ ಸಿವಿಲ್ ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರಕ್ಕೆ ಆದೇಶ ಪಡೆದುಕೊಂಡಿದ್ದಾರೆ. ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 2571 ಎಲ್‌ಎಸ್‌ಪಿ 2005, ದಿನಾಂಕ 31/01/2006ರಲ್ಲಿ ನಿರ್ಧರಿಸಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಬ್ಯಾಲಿಹಾಳ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 67/02 | 12/2 | 1–32 | 388707 |
| 2 | 68/02 | 12/4 | 3–35 | 836223 |
| 3 | 69/02 | 12/3 | 6–00 | 1294522 |
| 4 | 70/02 | 13/ಎ | 1–11 | 275480 |
| 5 | 71/02 | 16/1 | 0–15 | 81376 |
| 6 | 72/02 | 22/1ಬಿ/1 | 1–00 | 216170 |
| 7 | 73/02 | 6/2 | 4–01 | 868573 |
| | | 7/2 | 10–37 | 2356199 |
| 8 | 74/02 | 1/ಬಿ | 6–12 | 1359224 |
| 9 | 75/02 | 8/3 | 2–22 | 550460 |
| | **ಒಟ್ಟು** | | | **8226934** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 152 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 17ನೇ ಜನವರಿ 2009.**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣದಲ್ಲಿ ಸ್ವಾಧೀನಪಡಿಸಿಕೊಂಡ ಬ್ಯಾಲಿಹಾಳ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.82,26,934–00ಗಳನ್ನು (ಎಂಭತ್ತೆರಡು ಲಕ್ಷದ ಇಪ್ಪತ್ತಾರು ಸಾವಿರದ ಒಂಭೈನೂರ ಮೂವತ್ತಾನ್ಲಲ್ಕು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ:22.09.2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.397

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಹುಲಿಯಾಪುರ ಕೆರೆ ರಸ್ತೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 02/12/2008ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾ/2008-09/6389

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 02/12/2008ರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಹುಲಿಯಾಪುರ ಕೆರೆ ರಸ್ತೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಗುಡ್ಡದ ಹನುಮಸಾಗರ ಗ್ರಾಮದ ಜಮೀನುಗಳಿಗೆ ಕೊಪ್ಪಳದ ಉಪ ವಿಭಾಗಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಪ್ರಕಾರ ಉಪ ವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು, ಕೊಪ್ಪಳ ಇವರ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ರೂ.3,74,879-00ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಕೆರೆಯ ಮೂಲ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 09/08/2001
- ಉಪ ವಿಭಾಗಾಧಿಕಾರಿಗಳ ಐತೀರ್ಪಿನ ದಿನಾಂಕ 24/06/2008

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ಹುಲಿಯಾಪುರ ಕೆರೆ ರಸ್ತೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸದರಿ ತಾಲ್ಲೂಕಿನ ಗುಡ್ಡದಹನುಮಸಾಗರ ಗ್ರಾಮದ ಸ.ನಂ.43/2ರ 1-14 ಎಕರೆ ಜಮೀನಿಗೆ ಕೊಪ್ಪಳ ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು ಎಲ್.ಎ.ಸಿ. ಸಂಖ್ಯೆ:283/04 ಹಾಗೂ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:6856/07ರಲ್ಲಿ ದಿನಾಂಕ 31/05/07ರಲ್ಲಿ ನೀಡಿದ ತೀರ್ಪಿನ್ನು ಉಲ್ಲೇಖಿಸಿ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೊರಡಿಸಿರುವ ಐತೀರ್ಪಿನಂತೆ ಪಾವತಿಸಬೇಕಾದ ಪರಿಹಾರ ಧನದ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಗುಡ್ಡದಹನುಮ ಸಾಗರ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ. | ಭೂ.ಸ್ವಾ. ಕಾಯ್ದೆ ಕಲಂ 28(ಎ)ರಡಿ ಐತೀರ್ಪಿನ ಸಂಖ್ಯೆ ಮತ್ತು ದಿನಾಂಕ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 43/2 | 1-14 | ಕಂ/ಭೂಸ್ವಾ/34/2000-01/ 28(ಎ)/ಅಪೀಲು ದಿನಾಂಕ 24/06/08 | 3,74,879-00 |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 159 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 17ನೇ ಜನವರಿ 2009.**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಹುಲಿಯಾಪುರ ಕೆರೆ ರಸ್ತೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಗುಡ್ಡದ ಹನುಮಸಾಗರ ಗ್ರಾಮದ ಜಮೀನುಗಳಿಗೆ ಕೊಪ್ಪಳದ ಉಪ ವಿಭಾಗಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಪ್ರಕಾರ ಉಪ ವಿಭಾಗಾಧಿಕಾರಿಗಳು, ಕೊಪ್ಪಳ ಇವರು ದಿನಾಂಕ 24/06/2008ರ ಐತೀರ್ಪಿನಂತೆ ಪರಿಹಾರ ಧನದ ಮೊತ್ತ ರೂ.3,74,879-00ಗಳನ್ನು (ಮೂರು ಲಕ್ಷದ ಎಪ್ಪತ್ತಾಲ್ಕು ಸಾವಿರದ ಎಂಟುನೂರ ಎಪ್ಪತ್ತೊಂಭತ್ತು ರೂ.ಗಳು ಮಾತ್ರ) ಪ್ರಸ್ತಾವನೆಯಲ್ಲಿ ತಿಳಿಸಿರುವ ಸ.ನಂ.ಗಳಿಗೆ ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ 02/09/2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 398

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ತುಮಕೂರು ನಗರದ ಮಧ್ಯಭಾಗದಲ್ಲಿರುವ ತುಮಕೂರಿನ ಅಮಾನಿಕೆರೆಯನ್ನು ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಅಭಿವೃದ್ಧಿಪಡಿಸಲು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ದಿನಾಂಕ 29/12/08ರಂದು ಕೊನೆಗೊಂಡ ಪತ್ರ ಸಂಖ್ಯೆ:ಮುಸದ/ತಾಂ–1/ ಸ.ಇಂ.2/ತುಮಕೂರು ಅಮಾನಿಕೆರೆ/ 2008–09/4562.

**ಪ್ರಸ್ತಾವನೆ:**

ತುಮಕೂರು ನಗರದ ಮಧ್ಯಭಾಗದಲ್ಲಿರುವ ಸಣ್ಣ ನೀರಾವರಿ ಇಲಾಖೆಗೆ ಸೇರಿದ ತುಮಕೂರು ಅಮಾನಿ ಕೆರೆಯನ್ನು ಜಿಲ್ಲಾಡಳಿತ ಮತ್ತು ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರವು ಜಂಟಿಯಾಗಿ "ರಾಷ್ಟ್ರೀಯ ಕೆರೆ ಸಂರಕ್ಷಣಾ ಯೋಜನೆ"ಯಡಿಯಲ್ಲಿ ಕೇಂದ್ರ ಸರ್ಕಾರದ ಧನಸಹಾಯದೊಂದಿಗೆ ಅಭಿವೃದ್ಧಿಪಡಿಸುವ ಯೋಜನೆಗೆ ಮಂಜೂರಾತಿ ಪಡೆದಿರುವುದಾಗಿ ತಿಳಿಸಿರುವುದರಿಂದ, ಈ ಕೆರೆಯನ್ನು ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಲು ಮೇಲೆ ಓದಲಾದ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 187 ಮಸಾವಿ 2008 ಬೆಂಗಳೂರು, ದಿನಾಂಕ 19ನೇ ಜನವರಿ 2009.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ತುಮಕೂರು ಅಮಾನಿ ಕೆರೆಯನ್ನು ಸಮಗ್ರ ಅಭಿವೃದ್ಧಿಪಡಿಸುವ ಸಲುವಾಗಿ ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಸ್ತಾಂತರಿಸಲು ಅನುಮೋದನೆ ನೀಡಿದೆ.

ಅ) ಹಾಲಿ ಇರುವ ಕೆರೆಯ ಅಚ್ಚುಕಟ್ಟುದಾರರಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು;

ಆ) ಕೆರೆಯ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಾಗ ಕೆರೆಯ ಏರಿ, ತೂಬು, ಕೋಡಿಯ ಮೂಲ ಸ್ವರೂಪಕ್ಕೆ ಧಕ್ಕೆಯಾಗದಂತೆ ವಿನ್ಯಾಸ ಮತ್ತು ಮಾರ್ಪಾಟುಗಳ ಕಾರ್ಯನಿರ್ವಹಿಸುವುದು;

ಇ) ಕಾಲಕಾಲಕ್ಕೆ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವುದು;

ಈ) ಕೆರೆಯ ಹೂಳನ್ನು ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳೊಂದಿಗೆ ಚರ್ಚಿಸಿ ನಿಗದಿತ ಆಳಕ್ಕೆ ತೆಗೆದು ಅಭಿವೃದ್ಧಿಪಡಿಸುವುದು;

ಉ) ಕೆರೆಯ ಅಂಗಳಕ್ಕೆ ಸಾರ್ವಜನಿಕರ ಭೇಟಿಗೆ ಯಾವುದೇ ನಿರ್ಬಂಧವನ್ನು ವಿಧಿಸಬಾರದು;

ಊ) ಕೆರೆಯ ವ್ಯಾಪ್ತಿಯ ನೀರಾವರಿ ಪ್ರದೇಶಕ್ಕೆ ಹಾಗೂ ನೀರಾವರಿಗೆ ಯಾವುದೇ ಅಡೆತಡೆ ಉಂಟಾಗದಂತೆ ಹಾಲಿ ಇರುವ ಕಾಲುವೆಗಳನ್ನು ಸುಸ್ಥಿತಿಯಲ್ಲಿ ನಿರ್ವಹಿಸುವುದು;

ಋ) ಕೆರೆಯನ್ನು ಯಾವುದೇ ಆರ್ಥಿಕ ಲಾಭಕ್ಕೆ ಬಳಸಿಕೊಳ್ಳಬಾರದು

ೠ ) ಈ ಕೆರೆಯ ಮೂಲ ಸ್ವರೂಪಕ್ಕೆ ಧಕ್ಕೆಯಾದಲ್ಲಿ ಅದರ ವೆಚ್ಚವನ್ನು ಭರಿಸತಕ್ಕದ್ದು;

ಎ) ಒಂದು ವೇಳೆ ಒತ್ತುವರಿಗಳಾಗಿದ್ದಲ್ಲಿ, ಒತ್ತುವರಿಯನ್ನು ತಡೆಗಟ್ಟಲು ಹಾಗೂ ತೆರವುಗೊಳಿಸಲು ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರವು ಕಾನೂನು ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 489 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

**ವಿಷಯ:** ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ರಚಿಸಲಾಗಿರುವ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 166 ಮಸಾವಿ 2007, ದಿನಾಂಕ: 21/01/2008.
2. ಸರ್ಕಾರದ ಆದೇಶ ಸಂಖ್ಯೆ: ಸನೀಇ 166 ಮಸಾವಿ 2007, ದಿನಾಂಕ: 29/07/2008.
3. ಸರ್ಕಾರದ ಆದೇಶ ಸಂಖ್ಯೆ: ಸನೀಇ 46 ಮಸಾವಿ 2008, ದಿನಾಂಕ: 01/12/2008.
4. ದಿನಾಂಕ: 29.11.2008ರ ಪತ್ರ ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ತಾಸ-1/ಸ.ಇಂ.3:ಮುಂದುವರಿಕೆ/2008/4241.

**ಪ್ರಸ್ತಾವನೆ:**

ರೂ.50.00 ಲಕ್ಷಗಳಿಗೂ ಮೇಲ್ಪಟ್ಟ ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ಅಧಿಕಾರೇತರ ಹಾಗೂ ಅಧಿಕಾರಿ ಸದಸ್ಯರನ್ನೊಳಗೊಂಡ "ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ"ಯನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ:21/01/2008ರ ಸರ್ಕಾರದ ಆದೇಶದಲ್ಲಿ ಒಂದು ವರ್ಷದ ಅವಧಿಗೆ ಪುನರ್ ರಚಿಸಲಾಗಿದೆ. ನಂತರ ಈ ಸಮಿತಿಗೆ ಮೇಲೆ (2) ಹಾಗೂ (3) ರಲ್ಲಿ ಓದಲಾದ ದಿನಾಂಕ:29/07/2008 ಹಾಗೂ ದಿನಾಂಕ:01/12/2008ರ ಸರ್ಕಾರದ ಆದೇಶದಲ್ಲಿ ಹೆಚ್ಚುವರಿ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

"ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ"ಯ ಅವಧಿ ದಿನಾಂಕ:20/01/2009ಕ್ಕೆ ಅಂತ್ಯಗೊಳ್ಳಲಿದ್ದು, ಆಯವ್ಯಯದ ಅಂದಾಜು ಪಟ್ಟಿಗಳ ಮೊತ್ತ ರೂ. 50.00 ಲಕ್ಷಗಳಿಗೆ ಮೀರಿದ ಎಲ್ಲಾ ಪ್ರಸ್ತಾವನೆಗಳನ್ನು ಮತ್ತು ರೂ. 250.00 ಲಕ್ಷಕ್ಕೆ ಮೇಲ್ಪಟ್ಟ ಕರಡು ಟೆಂಡರ್ ಹೊತ್ತಿಗೆಯನ್ನು ತಯಾರಿಸಲು ಹಾಗೂ ನಬಾರ್ಡ್ ಅಡಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳು, ನಿರ್ಮಾಣ ಹಂತದ ಕಾಮಗಾರಿಗಳಲ್ಲಿ ಉದ್ಭವ ಆಗುವ ಕೆಲವು ಕ್ಲಿಷ್ಟ ಸಮಸ್ಯೆಗಳಿಗೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯಿಂದ ಸಲಹೆ ಅಥವಾ ಮಾರ್ಗೋಪಾಯ ಪಡೆಯುವುದು ಅತ್ಯವಶ್ಯಕವಾಗಿರುವುದರಿಂದ ಸದರಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಅವಧಿಯನ್ನು ದಿನಾಂಕ: 20/01/2009ರಿಂದ ಇನ್ನೂ ಎರಡು ವರ್ಷಗಳ ಅವಧಿಗೆ ಮುಂದುವರೆಸಿ ಆದೇಶ ಹೊರಡಿಸುವಂತೆ ಮೇಲೆ (4)ರಲ್ಲಿ ಓದಲಾದ ದಿನಾಂಕ: 29/11/2008ರ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಅಭಿಯಂತರರು ಕೋರಿರುತ್ತಾರೆ.

ಈ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ: ಸನೀಇ 46 ಮಸಾವಿ 2008, ಬೆಂಗಳೂರು, ದಿನಾಂಕ: 31ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯ ಕಾಮಗಾರಿಗಳ ಅಂದಾಜು ಪಟ್ಟಿಯನ್ನು ಪರಿಶೀಲಿಸುವ ಸಲುವಾಗಿ ರಚಿಸಲಾದ ಕೆಳಕಂಡ ಅಧಿಕಾರೇತರ ಹಾಗೂ ಅಧಿಕಾರಿ ಸದಸ್ಯರನ್ನೊಳಗೊಂಡ "ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ"ಯನ್ನು ದಿನಾಂಕ: 20/01/2009 ರಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದ ವರೆಗೆ ಮುಂದುವರಿಸಲಾಗಿದೆ.

**ಅಧಿಕಾರೇತರ ಸದಸ್ಯರು:**

1. ಶ್ರೀ ಎಸ್.ಜೆ.ಚನ್ನಬಸಪ್ಪ, ಸರ್ಕಾರದ ಕಾರ್ಯದರ್ಶಿ (ನಿವೃತ್ತ) ಜಲಸಂಪನ್ಮೂಲ ಇಲಾಖೆ : ಅಧ್ಯಕ್ಷರು
2. ಶ್ರೀ ಸಿ.ಎನ್.ಬಾಬು, ಮುಖ್ಯ ಇಂಜಿನಿಯರ್ (ನಿವೃತ್ತ) : ಸದಸ್ಯರು
3. ಶ್ರೀ ಆರ್. ಬಸವನಗೌಡ, ಮುಖ್ಯ ಇಂಜಿನಿಯರ್ (ನಿವೃತ್ತ) : ಸದಸ್ಯರು
4. ಶ್ರೀ ಬಸವರಾಜ್ ಕುಕುಂದಾ, ಮುಖ್ಯ ಇಂಜಿನಿಯರ್ (ನಿವೃತ್ತ) : ಸದಸ್ಯರು
5. ಪ್ರೊ:ರಾಮಪ್ರಸಾದ್, (ನಿವೃತ್ತ) ಪ್ರೊಫೆಸರ್, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು : ಸದಸ್ಯರು
6. ಶ್ರೀ ಎಸ್.ಎನ್.ಪ್ರಸಾದ್, ಪ್ರಧಾನ ಇಂಜಿನಿಯರ್(ನಿವೃತ್ತ) : ಸದಸ್ಯರು

7. ಶ್ರೀ ಪಿ.ವಿ.ಜತ್ತಿ, ಮುಖ್ಯ ಇಂಜಿನಿಯರ್(ನಿವೃತ್ತ) : ಸದಸ್ಯರು
8. ಶ್ರೀ ಬಿ.ಎ.ರೆಡ್ಡಿ, ಮುಖ್ಯ ಇಂಜಿನಿಯರ್(ನಿವೃತ್ತ) : ಸದಸ್ಯರು

**ಅಧಿಕಾರಿ ಸದಸ್ಯರು:**

1. ಮುಖ್ಯ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ : ಸದಸ್ಯರು
2. ನಿರ್ದೇಶಕರು, ಕೆ.ಇ.ಆರ್.ಎಸ್., ಕೃಷ್ಣರಾಜಸಾಗರ : ಸದಸ್ಯರು
3. ನಿರ್ದೇಶಕರು (ಎಂ&ಎ), ಕೇಂದ್ರ ಜಲ ಆಯೋಗ, ಬೆಂಗಳೂರು : ಸದಸ್ಯರು
4. ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ ಆರ್ಥಿಕ ಇಲಾಖೆ (ಲೋಕೋಪಯೋಗಿ, ಆರ್ಥಿಕ ಕೋಶ), ವಿಧಾನಸೌಧ : ಸದಸ್ಯರು
5. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ : ಸದಸ್ಯರು
6. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು : ಸದಸ್ಯ ಕಾರ್ಯದರ್ಶಿ

ಈ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಅಧಿಕಾರೇತರ ಅಧ್ಯಕ್ಷರು ಹಾಗೂ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಸನೀಇ 28 ಮಸಾವಿ 2004 ದಿನಾಂಕ: 24.09.2007 ರಂತೆ ಉಪಸ್ಥಿತಿ ಭತ್ಯೆ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03.02.2001ರಂತೆ ಪ್ರಯಾಣ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.524

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು ರೇವನೂರು ಗ್ರಾಮದ ಹತ್ತಿರ ಹಳ್ಳಕ್ಕೆ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 55 ಅಪಿಬಂ 2008, ದಿನಾಂಕ 29/03/2008.
2. ದಿನಾಂಕ 29/11/2008ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಎಇ-5/2008- 09/6313.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು ರೇವನೂರು ಗ್ರಾಮದ ಹತ್ತಿರ ಹಳ್ಳಕ್ಕೆ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 90.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 29/03/2008ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಆದೇಶ ಸಂಖ್ಯೆ:42/2008-09ರಲ್ಲಿ ತಾಂತ್ರಿಕ ಮಂಜೂರಾತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಗುಲ್ಬರ್ಗಾ ಜಿಲ್ಲಾ ಟೆಂಡರ್ ಬುಲೆಟಿನ್ | ದಿ:31/05/2008 |
| 2 | ಕರ್ನಾಟಕ ರಾಜ್ಯ ಪತ್ರ | ದಿ:05/06/2008 |
| 3 | ಪ್ರಜಾವಾಣಿ ಹಾಗೂ ಕನ್ನಡಪ್ರಭಾ ದಿನಪತ್ರಿಕೆಗಳು | ದಿ:07/06/2008 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಪೂರ್ವಾರ್ಹತೆ ಟೆಂಡರ್‌ನಲ್ಲಿ ಭಾಗವಹಿಸಿದ್ದ 13 ಜನ ಗುತ್ತಿಗೆದಾರರು ಸಲ್ಲಿಸಿದ್ದ ಟೆಂಡರ್‌ಗಳನ್ನು ದಿನಾಂಕ 31/07/08ರಂದು ತೆರೆಯಲಾಗಿದ್ದು, ಈ 13 ಜನ ಗುತ್ತಿಗೆದಾರರೂ ಅರ್ಹತೆ ಹೊಂದಿದ್ದರಿಂದ, ಎಲ್ಲರೂ ಖಾಲಿ ಆರ್ಥಿಕ ಬಿಡ್‌ಗಳ ಅರ್ಜಿಗಳನ್ನು ಪಡೆದಿದ್ದರು. ಆದರೆ, ನಿಗದಿತ ದಿನಾಂಕದಂದು 5 ಜನ ಗುತ್ತಿಗೆದಾರರು ಮಾತ್ರ ಸಲ್ಲಿಸಿದ್ದ ಭರ್ತಿ ಮಾಡಿದ ಆರ್ಥಿಕ ಬಿಡ್‌ಗಳನ್ನು ದಿನಾಂಕ 03/10/08ರಂದು ತೆರೆಯಲಾಗಿದ್ದು, ಇದರಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.99,84,912/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.85,34,400/- |

| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಹುಲಿಕಂಠರಾಯ ಎಸ್.ಎಂ 1ನೇ ದರ್ಜೆ ಗುತ್ತಿಗೆದಾರರು | ರೂ.1,06,69,247/- | 20.08 ಹೆಚ್ಚು | 25.01 ಹೆಚ್ಚು |
| 2 | ಕರಿಬಸಪ್ಪಗೌಡ ಕರಡಕರ್, 1ನೇ ದರ್ಜೆ ಗುತ್ತಿಗೆದಾರರು | ರೂ.1,09,97,603/- | 23.77 ಹೆಚ್ಚು | 28.86 ಹೆಚ್ಚು |
| 3 | ವೀರಭದ್ರಪ್ಪ ಪಾಟೀಲ, 1ನೇ ದರ್ಜೆ ಗುತ್ತಿಗೆದಾರರು | ರೂ.1,12,15,581/- | 26.23 ಹೆಚ್ಚು | 31.42 ಹೆಚ್ಚು |
| 4 | ಎಸ್.ಡಿ.ಗೌಂಡಿ, 1ನೇ ದರ್ಜೆ ಗುತ್ತಿಗೆದಾರರು | ರೂ.1,26,98,500/- | 42.92 ಹೆಚ್ಚು | 48.79 ಹೆಚ್ಚು |
| 5 | ಎಸ್.ಎಸ್.ದೇಸಾಯಿ, 1ನೇ ದರ್ಜೆ ಗುತ್ತಿಗೆದಾರರು | ರೂ.1,27,89,608/- | 43.94 ಹೆಚ್ಚು | 49.86 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿ ತಿಳಿಸಿರುವ ಶ್ರೀ ಹುಲಿಕಂಠರಾಯ ಎಸ್.ಎಂ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.1,06,69,247-00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 25.01ರಷ್ಟು ಹೆಚ್ಚಾಗಿದ್ದರಿಂದ, ಸೂಚಿಸಿರುವ ದರಗಳನ್ನು ಕಡಿಮೆ ಮಾಡಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಮುಖ್ಯ ಇಂಜಿನಿಯರ್‌ರವರು ನಡೆಸಿದ ಸಂಧಾನದಲ್ಲಿ ಗುತ್ತಿಗೆದಾರರು ತಮ್ಮ ದರಗಳನ್ನು ಶೇ.22.00ರಷ್ಟು ಕಡಿಮೆ ಮಾಡಲು ಒಪ್ಪಿದ್ದು, ಅದರಂತೆ ಇವರ ಟೆಂಡರ್ ಮೊತ್ತ ರೂ.1,04,11,968-00ಗಳಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 29/11/08ರ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23/12/2008 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.85,34,400-00ಗಳ ಮೇಲೆ ಶೇಕಡ 14.10ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.97,37,750-00ಗಳಿಗೆ ಕಾಮಗಾರಿಯನ್ನು ಶ್ರೀ ಹುಲಿಕಂಠರಾಯ ಎಸ್.ಎಂ., 1ನೇ ದರ್ಜೆ ಗುತ್ತಿಗೆದಾರರು, ಗುಲ್ಬರ್ಗಾ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆಂದು ತಿಳಿಸಿ, ಈ ಟೆಂಡರ್‌ನ್ನು ಅಂಗೀಕರಿಸಲು ಟೆಂಡರ್ ಇಲಾಖಾ ಸಮಿತಿಯ ಅಧ್ಯಕ್ಷರು ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 127 ಅಪಿಬಂ 2008, ಬೆಂಗಳೂರು, ದಿನಾಂಕ 2ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು ರೇವನೂರ ಗ್ರಾಮದ ಹತ್ತಿರ ಹಳ್ಳಕ್ಕೆ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.85,34,400-00ಗಳ ಮೇಲೆ ಶೇಕಡ 14.10ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.97,37,750-00ಗಳಿಗೆ (ತೊಂಭತ್ತೇಳು ಲಕ್ಷದ ಮೂವತ್ತೇಳು ಸಾವಿರದ ಏಳು ನೂರ ಐವತ್ತು ರೂ.ಗಳು ಮಾತ್ರ) ಶ್ರೀ ಹುಲಿಕಂಠರಾಯ ಎಸ್.ಎಂ., 1ನೇ ದರ್ಜೆ ಗುತ್ತಿಗೆದಾರರು, ಗುಲ್ಬರ್ಗಾ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.526 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಮುದ್ದೇಬಿಹಾಳ ಮತ್ತು ಮುಧೋಳ ತಾಲ್ಲೂಕುಗಳಲ್ಲಿ ಕೈಗೊಳ್ಳಲಾಗುತ್ತಿರುವ ಸಣ್ಣ ನೀರಾವರಿ ಕಾಮಗಾರಿಗಳಿಗೆ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿ:18/10/2008ರ ಪತ್ರದಸಂಖ್ಯೆ:ಮುಇಂ/ಸನೀಉವ/ಭೂಸ್ವಾ/08–09/ 4964.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 18/10/2008ರ ಪತ್ರದಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸಣ್ಣ ನೀರಾವರಿ ಬಿಜಾಪುರ ವಿಭಾಗದ ವ್ಯಾಪ್ತಿಯಲ್ಲಿ ಕೈಗೊಳ್ಳಲಾಗುತ್ತಿರುವ ಸಣ್ಣ ನೀರಾವರಿ ಕಾಮಗಾರಿಗಳಿಗಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಅವಾರ್ಡ್ ಪೂರ್ವ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿ ಗಳಲ್ಲಿ ಠೇವಣಿ ಮಾಡಲು ರೂ.17,79,531–00ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಕಂದಾಯ ಇಲಾಖೆಯ ಸುತ್ತೋಲೆ ಸಂಖ್ಯೆ:ಕಂಇ 42 ಭೂಸ್ವಾಹಾ 2000, ದಿನಾಂಕ 08/10/2001 ರಲ್ಲಿ ಸೂಚಿಸಿರುವಂತೆ ಭೂಸ್ವಾಧೀನ ಪ್ರಕ್ರಿಯೆಗಾಗಿ ಸಂಭವನೀಯ ವೆಚ್ಚದ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಬೇಕಾಗಿದೆ.

ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಅವಾರ್ಡ್ ಪೂರ್ವ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಬೇಕಾಗಿರುವ ಕಾಮಗಾರಿಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ತಾಲ್ಲೂಕು | ಕಾಮಗಾರಿಯ ಹೆಸರು | ಭೂಸ್ವಾಧೀನ ಕ್ಷೇತ್ರ ಎ – ಗುಂ | ಠೇವಣಿ ಮಾಡಬೇಕಾಗಿರುವ ಮೊತ್ತ(ರೂ.ಗಳಲ್ಲಿ) |
|---|---|---|---|---|
| 1 | ಮುದ್ದೇಬಿಹಾಳ | ವನಹಳ್ಳಿ ಗ್ರಾಮದ ಸಣ್ಣ ನೀರಾವರಿ ಕೆರೆ | 16–10 | 812500 |
| 2 | ಮುಧೋಳ | ದಾದನಟ್ಟಿ ಗ್ರಾಮದ ಹತ್ತಿರ ಇಂಗು ಕೆರೆ | 7–05 | 967031 |
| | ಒಟ್ಟು | | | **1779531** |

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 127 ಭೂಸ್ವಾಪ್ರ 2008 ಬೆಂಗಳೂರು ದಿನಾಂಕ 3ನೇ ಫೆಬ್ರವರಿ 2009.**

ಬಿಜಾಪುರ ಸಣ್ಣ ನೀರಾವರಿ ವಿಭಾಗದ ವ್ಯಾಪ್ತಿಯಲ್ಲಿ ಕೈಗೊಳ್ಳಲಾಗುತ್ತಿರುವ ಪ್ರಸ್ತಾವನೆಯಲ್ಲಿ ತಿಳಿಸಿರುವ ಹೊಸ ಸಣ್ಣ ನೀರಾವರಿ ಕಾಮಗಾರಿಗಳಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಒಟ್ಟು ಮುಂಗಡ ಹಣ ರೂ.17,79,531–00 (ಹದಿನೇಳು ಲಕ್ಷದ ಎಪ್ಪತ್ತೊಂಭತ್ತು ಸಾವಿರದ ಐನೂರ ಮೂವತ್ತೊಂದು ರೂ.ಗಳು ಮಾತ್ರ)ಗಳನ್ನು ಕಾಮಗಾರಿಗೆ ಅಗತ್ಯವಿರುವ ಭೂಸ್ವಾಧೀನದ ವಿಸ್ತೀರ್ಣದ ಬಗ್ಗೆ ದೃಢೀಕರಿಸಿಕೊಂಡು ಅದಕ್ಕನುಗುಣವಾಗಿ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡುವ ಷರತ್ತಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ 02/09/2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.528 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು ಸುಂಬಡ-ಕಾಚಾಪುರ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸನೀಇ 54 ಅಪಿಬಿಂ 2008, ದಿನಾಂಕ 29/03/2008.

2. ದಿನಾಂಕ 29/11/2008ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಎಇ-5/2008-09/6312.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು ಸುಂಬಡ-ಕಾಚಾಪುರ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 190.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 29/03/2008ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಆದೇಶ ಸಂಖ್ಯೆ:43/2008-09ರಲ್ಲಿ ತಾಂತ್ರಿಕ ಮಂಜೂರಾತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಕರ್ನಾಟಕ ರಾಜ್ಯ ಪತ್ರ | ದಿ:12/06/2008 |
| 2 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ:13/06/2008 |
| 3 | ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆ | ದಿ:19/06/2008 |
| 4 | ಸಂಯುಕ್ತ ಕರ್ನಾಟಕ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆಗಳು | ದಿ:20/06/2008 |
| 5 | ರಾಜ್ಯ ಟೆಂಡರ್ ಬುಲೆಟಿನ್ | ದಿ:21/06/2008 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಪೂರ್ವಾಹತೆ ಟೆಂಡರ್‌ನಲ್ಲಿ ಭಾಗವಹಿಸಿದ್ದ 12 ಜನ ಗುತ್ತಿಗೆದಾರರು ಸಲ್ಲಿಸಿದ್ದ ಟೆಂಡರ್‌ಗಳನ್ನು ದಿನಾಂಕ 31/07/08ರಂದು ತೆರೆಯಲಾಗಿದ್ದು, 12 ಜನ ಗುತ್ತಿಗೆದಾರರು ಅರ್ಹತೆ ಹೊಂದಿದ್ದರಿಂದ, ಎಲ್ಲರೂ ಖಾಲಿ ಆರ್ಥಿಕ ಬಿಡ್‌ಗಳ ಅರ್ಜಿಗಳನ್ನು ಪಡೆದಿದ್ದರು. ಆದರೆ, ನಿಗದಿತ ದಿನಾಂಕದಂದು 3 ಜನ ಗುತ್ತಿಗೆದಾರರು ಮಾತ್ರ ಸಲ್ಲಿಸಿದ್ದ ಭರ್ತಿ ಮಾಡಿದ ಆರ್ಥಿಕ ಬಿಡ್‌ಗಳನ್ನು ದಿನಾಂಕ 03/10/08ರಂದು ತೆರೆಯಲಾಗಿದ್ದು, ಇದರಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ.1,84,47,403/- |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ.1,76,76,777/- |
| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ರಾಜೇಂದ್ರ ಅಂದ್ರಾಳ, 1ನೇ ದರ್ಜೆ ಗುತ್ತಿಗೆದಾರರು | ರೂ.2,27,59,113/- | 23.37 ಹೆಚ್ಚು | 28.75 ಹೆಚ್ಚು |
| 2 | ಹುಲಿಕಂಠರಾಯ ಎಸ್.ಎಂ 1ನೇ ದರ್ಜೆ ಗುತ್ತಿಗೆದಾರರು | ರೂ.2,44,89,208/- | 32.75 ಹೆಚ್ಚು | 38.54 ಹೆಚ್ಚು |
| 3 | ಅಮರೇಶಗೌಡ, ಬಿ. 1ನೇ ದರ್ಜೆ ಗುತ್ತಿಗೆದಾರರು | ರೂ.2,46,16,505/- | 33.44 ಹೆಚ್ಚು | 39.26 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ: 1ರಲ್ಲಿ ತಿಳಿಸಿರುವ ಶ್ರೀ ರಾಜೇಂದ್ರ ಅಂದ್ರಾಳ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.2,27,59,113-00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 28.75ರಷ್ಟು ಹೆಚ್ಚಾಗಿದ್ದರಿಂದ, ಸೂಚಿಸಿರುವ ದರಗಳನ್ನು ಕಡಿಮೆ ಮಾಡಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಮುಖ್ಯ ಇಂಜಿನಿಯರ್‌ರವರು ನಡೆಸಿದ ಸಂಧಾನದಲ್ಲಿ ಗುತ್ತಿಗೆದಾರರು ತಮ್ಮ ದರಗಳನ್ನು ಶೇ.22.00ರಷ್ಟು ಕಡಿಮೆ ಮಾಡಲು ಒಪ್ಪಿದ್ದು, ಅದರಂತೆ ಇವರ ಟೆಂಡರ್ ಮೊತ್ತ

ರೂ.2,15,65,668-00ಗಳಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 29/11/08ರ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23/12/2008 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.1,76,76,777-00ಗಳ ಮೇಲೆ ಶೇಕಡ 14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,01,51,526-00ಗಳಿಗೆ ಕಾಮಗಾರಿಯನ್ನು ಶ್ರೀ ರಾಜೇಂದ್ರ ಅಂದ್ರಾಳ, 1ನೇ ದರ್ಜೆ ಗುತ್ತಿಗೆದಾರರು, ಗುಲ್ಬರ್ಗಾ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆಂದು ತಿಳಿಸಿ, ಈ ಟೆಂಡರ್‌ನ್ನು ಅಂಗೀಕರಿಸಲು ಟೆಂಡರ್ ಇಲಾಖಾ ಸಮಿತಿಯ ಅಧ್ಯಕ್ಷರು ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 125 ಅಪಿಬಂ 2008, ಬೆಂಗಳೂರು, ದಿನಾಂಕ 2ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು ಸುಂಬಡ-ಕಾಚಾಪುರ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.1,76,76,777-00ಗಳ ಮೇಲೆ ಶೇಕಡ 14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,01,51,526-00ಗಳಿಗೆ (ಎರಡು ಕೋಟಿ ಒಂದು ಲಕ್ಷದ ಐವತ್ತೊಂದು ಸಾವಿರದ ಐನೂರ ಇಪ್ಪತ್ತಾರು ರೂ.ಗಳು ಮಾತ್ರ) ಶ್ರೀ ರಾಜೇಂದ್ರ ಅಂದ್ರಾಳ, 1ನೇ ದರ್ಜೆ ಗುತ್ತಿಗೆದಾರರು, ಗುಲ್ಬರ್ಗಾ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.527

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು ಹ್ಯಾಟಿ, ಮುಂಡರಗಿ ಸೈಟ್-1, ಲಾಚನಕೇರಿ ಮತ್ತು ಕರ್ಕಿಹಳ್ಳಿ ಏತ ನೀರಾವರಿ ಯೋಜನೆಗಳಿಗೆ 11 ಕೆ.ವಿ. ಲಿಂಕ್ ಲೈನ್ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 30 ಏನೀಯೋ 2008, ದಿನಾಂಕ 31/03/2008.
2. ದಿನಾಂಕ 08/12/08ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ ತಾಂಸ-3/ಸ.ಇಂ.7/2008-09/6520.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು, ಹ್ಯಾಟಿ, ಮುಂಡರಗಿ ಸೈಟ್-1, ಲಾಚನಕೇರಿ ಮತ್ತು ಕರ್ಕಿಹಳ್ಳಿ ಏತ ನೀರಾವರಿ ಯೋಜನೆಗಳಿಗೆ 11 ಕೆ.ವಿ. ಲಿಂಕ್ ಲೈನ್ ಸೌಲಭ್ಯ ಒದಗಿಸುವ ಕಾಮಗಾರಿಯ 49.13 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಆದೇಶ ಸಂಖ್ಯೆ: 3131, ದಿನಾಂಕ 26/06/2008ರಲ್ಲಿ ತಾಂತ್ರಿಕ ಮಂಜೂರಾತಿಯನ್ನು ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕೊಪ್ಪಳ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ದಿನಾಂಕ 19/07/2008ರಂದು

ಕೊಪ್ಪಳ ಜಿಲ್ಲಾ ಟೆಂಡರ್ ಬುಲೆಟಿನ್‌ನಲ್ಲಿ, ದಿನಾಂಕ 24/07/2008ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಹಾಗೂ ಪ್ರಮುಖ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ 12 ಜನ ಗುತ್ತಿಗೆದಾರರು ಅರ್ಜಿ ಸಲ್ಲಿಸಿ ಟೆಂಡರ್ ಫಾರಂ ಪಡೆದಿದ್ದು, ಅದರಲ್ಲಿ 5 ಜನ ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್ ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ 23/09/2008ರಂದು ತೆರೆಯಲಾಗಿದ್ದು, ಗುತ್ತಿಗೆದಾರರು ನಮೂದಿಸಿರುವ ದರಗಳ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.43,19,960/– |
| 2008–09ನೇ ಜೆಸ್ಕಾಂ ದರಪಟ್ಟಿಯಂತೆ ಟೆಂಡರ್ ಇಡಲಾದ ಮೊತ್ತ | ರೂ.42,40,057/– |

| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಪ್ರೇಮ ಎಲೆಕ್ಟ್ರಿಕಲ್ಸ್, ಗುತ್ತಿಗೆದಾರರು, ಮೈಸೂರು | ರೂ.46,42,400/– | 7.46 ಹೆಚ್ಚು | 9.48 ಹೆಚ್ಚು |
| 2 | ಶ್ರೀರಾಮ ಎಂಟರ್ ಪ್ರೈಸಸ್, ಗುತ್ತಿಗೆದಾರರು, ಕೊಪ್ಪಳ | ರೂ.55,34,215/– | 28.10 ಹೆಚ್ಚು | 30.52 ಹೆಚ್ಚು |
| 3 | ಪ್ರವೀಣ್ ಎಲೆಕ್ಟ್ರಿಕಲ್ಸ್, ಗುತ್ತಿಗೆದಾರರು, ಗದಗ್. | ರೂ.56,44,119/– | 30.65 ಹೆಚ್ಚು | 33.11 ಹೆಚ್ಚು |
| 4 | ಶಾಲಂ ಎಲೆಕ್ಟ್ರಿಕಲ್ಸ್, ಗುತ್ತಿಗೆದಾರರು, ಕೊಪ್ಪಳ | ರೂ.58,88,480/– | 36.30 ಹೆಚ್ಚು | 38.87 ಹೆಚ್ಚು |
| 5 | ಆರ್.ಆರ್. ಎಂಟರ್ ಪ್ರೈಸಸ್, ಗುತ್ತಿಗೆದಾರರು, ಬೆಂಗಳೂರು | ರೂ.73,93,420/– | 71.14 ಹೆಚ್ಚು | 74.37 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ.1ರಲ್ಲಿ ತಿಳಿಸಿರುವ ಪ್ರೇಮ ಎಲೆಕ್ಟ್ರಿಕಲ್ಸ್, ಗುತ್ತಿಗೆದಾರರು, ಮೈಸೂರು ಇವರು ನಮೂದಿಸಿರುವ ಮೊತ್ತ ರೂ.46,42,4000–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 9.48ರಷ್ಟು ಹೆಚ್ಚಾಗಿದ್ದು, ಚಾಲ್ತಿ ದರಪಟ್ಟಿಯ ಮೇಲೆ ಶೇ.6ಕ್ಕಿಂತ ಹೆಚ್ಚುವರಿ ದರವನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರಿಗೆ ಅಧಿಕಾರ ಇಲ್ಲದೇ ಇದ್ದುದರಿಂದ, ಸರ್ಕಾರದ ಅನುಮೋದನೆಗಾಗಿ ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಪ್ರಸ್ತಾವನೆ ಸಲ್ಲಿಸಿದ್ದರು.

ಈ ಟೆಂಡರ್ ಪ್ರಸ್ತಾವನೆಯನ್ನು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಮುಂದೆ ಮಂಡಿಸುವಂತೆ ಸೂಚಿಸಿದ್ದರ ಮೇರೆಗೆ ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23/12/2008ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಟೆಂಡರಿಗಿಡಲಾದ ಪರಿಷ್ಕೃತ ಮೊತ್ತ ರೂ.42,40,057–00ಗಳ ಮೇಲೆ ಶೇಕಡ 9.45ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.46,40,742–00ಗಳಿಗೆ ಕಾಮಗಾರಿಯನ್ನು ಪ್ರೇಮ ಎಲೆಕ್ಟ್ರಿಕಲ್ಸ್, ಗುತ್ತಿಗೆದಾರರು, ಮೈಸೂರು ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 68 ಏನೀಯೋ 2008, ಬೆಂಗಳೂರು, ದಿನಾಂಕ 2ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು, ಹ್ಯಾಟಿ, ಮುಂಡರಗಿ ಸೈಟ್–1, ಲಾಚನಕೇರಿ ಮತ್ತು ಕರ್ಕಿಹಳ್ಳಿ ಏತ ನೀರಾವರಿ ಯೋಜನೆಗಳಿಗೆ 11 ಕೆ.ವಿ. ಲಿಂಕ್ ಲೈನ್ ಸೌಲಭ್ಯ ಒದಗಿಸುವ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ಬೆಸ್ಕಾಂ ದರಪಟ್ಟಿಯಂತೆ ಟೆಂಡರಿಗೆ ಇಡಲಾದ ಮೊತ್ತ ರೂ.42,40,057–00ಗಳ ಮೇಲೆ ಶೇಕಡ 9.45ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.46,40,742–00ಗಳಿಗೆ (ನಲವತ್ತಾರು ಲಕ್ಷದ ನಲವತ್ತು ಸಾವಿರದ ಏಳುನೂರ ನಲವತ್ತೆರಡು ರೂ.ಗಳು ಮಾತ್ರ) ಪ್ರೇಮ ಎಲೆಕ್ಟ್ರಿಕಲ್ಸ್, ಗುತ್ತಿಗೆದಾರರು, ಮೈಸೂರು ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.525

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ಸಚಿಪಮೂಡ ಗ್ರಾಮದ ಹತ್ತಿರ ಏತ ನೀರಾವರಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸನೀಇ 21 ಏನೀಯೋ 2007, ದಿನಾಂಕ 30/03/07.

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ದಿನಾಂಕ 23/12/08ರ ಪತ್ರ ಸಂಖ್ಯೆ:ಮುಸದ/ತಾಂ–5/ಸಇಂ–11/ದ.ಕ. ಬಂಟ್ವಾಳ/ಸಜಿಪಮೂಡ ಏನಿಯೋ/ ಟೆಂಡರ್/2008/4501

**ಪ್ರಸ್ತಾವನೆ:**

ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ಸಚಿಪಮೂಡ ಗ್ರಾಮದ ಹತ್ತಿರ ಏತ ನೀರಾವರಿ ಕಾಮಗಾರಿಯ 247.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 30/03/07ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | ದಿ:25/08/08 |
| 2 | ರಾಜ್ಯ ಟೆಂಡರ್ ಬುಲೆಟಿನ್ | ದಿ:28/08/08 |
| 3 | ಕನ್ನಡ ಪ್ರಭ ದಿನಪತ್ರಿಕೆ ಮತ್ತು ದಿ ಹಿಂದೂ ಆಂಗ್ಲ ದಿನಪತ್ರಿಕೆ | ದಿ:21/10/08 |

ಕಾರಣಾಂತರಗಳಿಂದ ಟೆಂಡರ್ ಪ್ರಕಟಣೆಯನ್ನು ತಿದ್ದುಪಡಿ ಮಾಡಿ ಪ್ರಕಟಣೆಯನ್ನು ದಿನಾಂಕ 03/10/08ರಂದು ಹೊರಡಿಸಿದ್ದು, ಸದರಿ ಪ್ರಕಟಣೆಯು ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್‌ನಲ್ಲಿ ದಿನಾಂಕ 06/10/08ರಂದು ಹಾಗೂ ರಾಜ್ಯ ಟೆಂಡರ್ ಬುಲೆಟಿನ್‌ನಲ್ಲಿ ದಿನಾಂಕ 13/10/08ರಂದು ಪ್ರಕಟಿಸಲಾಗಿದೆ. ಸದರಿ ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ ಇಬ್ಬರು ಗುತ್ತಿಗೆದಾರರು ನಿಗಧಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 21/11/08ರಂದು ತೆರೆಯಲಾಗಿ ಇದರಲ್ಲಿ ಒಬ್ಬರು ಗುತ್ತಿಗೆದಾರರ ಟೆಂಡರ್ ಮಾತ್ರ ಅರ್ಹವಾಗಿದ್ದು, ಈ ಗುತ್ತಿಗೆದಾರರ ಆರ್ಥಿಕ ಬಿಡ್‌ನ್ನು ದಿನಾಂಕ 01/12/08ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.1,78,48,703/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.2,47,16,468/– |

| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಅಂಬಿಕಾ ಎಲೆಕ್ಟ್ರಿಕಲ್ಸ್ ಅಂಡ್ ಸಿವಿಲ್ ಕಾಂಟ್ರಾಕ್ಟರ್ಸ್, 1ನೇ ದರ್ಜೆ ಗುತ್ತಿಗೆದಾರರು, ಉಡುಪಿ | ರೂ.3,01,80,925/– | 69.09 ಹೆಚ್ಚು | 22.11 ಹೆಚ್ಚು |

ಮೇಲ್ಕಂಡಂತೆ ಮೆ:ಅಂಬಿಕಾ ಎಲೆಕ್ಟ್ರಿಕಲ್ಸ್ ಅಂಡ್ ಸಿವಿಲ್ ಕಾಂಟ್ರಾಕ್ಟರ್ಸ್, 1ನೇ ದರ್ಜೆ ಗುತ್ತಿಗೆದಾರರು, ಉಡುಪಿ ಇವರು ನಮೂದಿಸಿರುವ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 22.11ರಷ್ಟು ಹೆಚ್ಚಾಗಿದ್ದು, ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಿ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 23/12/08ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23/12/08ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಪರಿಷ್ಕೃತ ಟೆಂಡರ್ ಮೊತ್ತ ರೂ.2,47,16,468–00ಗಳ ಮೇಲೆ ಶೇ.14.85ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,83,86,863–00ಗಳಿಗೆ ಕಾಮಗಾರಿಯನ್ನು ಮೆ:ಅಂಬಿಕಾ ಎಲೆಕ್ಟ್ರಿಕಲ್ಸ್ ಅಂಡ್ ಸಿವಿಲ್ ಕಾಂಟ್ರಾಕ್ಟರ್ಸ್, 1ನೇ ದರ್ಜೆ ಗುತ್ತಿಗೆದಾರರು, ಉಡುಪಿ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಿದೆ. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆಂದು ತಿಳಿಸಿ, ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 71 ಏನೀಯೋ 2008, ಬೆಂಗಳೂರು, ದಿನಾಂಕ 30ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ಸಜಿಪಮೂಡ ಗ್ರಾಮದ ಹತ್ತಿರ ಏತ ನೀರಾವರಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಗಣಿಸಿದ ಪರಿಷ್ಕೃತ ಟೆಂಡರಿಗೆ ಇಡಲಾದ ಮೊತ್ತ ರೂ.2,47,16,468–00ಗಳ ಮೇಲೆ ಶೇ.14.85ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,83,86,863–00 ಗಳಿಗೆ (ಎರಡು ಕೋಟಿ ಎಂಭತ್ಮೂರು ಲಕ್ಷದ ಎಂಭತ್ತಾರು ಸಾವಿರದ ಎಂಟುನೂರ ಅರವತ್ಮೂರು ರೂ.ಗಳು ಮಾತ್ರ) ಮೆ:ಅಂಬಿಕಾ ಎಲೆಕ್ಟ್ರಿಕಲ್ಸ್ ಅಂಡ್ ಸಿವಿಲ್ ಕಾಂಟ್ರಾಕ್ಟರ್ಸ್, 1ನೇ ದರ್ಜೆ ಗುತ್ತಿಗೆದಾರರು, ಉಡುಪಿ ರವರಿಗೆ ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.535

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೀದರ್ ಜಿಲ್ಲೆ, ಔರಾದ್ ತಾಲ್ಲೂಕಿನ ಗಣೇಶಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ವಾಗನಗೇರಾ ಮತ್ತು ಮುರ್ಕಿ ಗ್ರಾಮಗಳ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ) ಪ್ರಕಾರ ವಿಶೇಷ ಭೂಸ್ವಾಧೀನಾಧಿಕಾರಿಗಳು(ಕಾರಂಜಾ ಯೋಜನೆ) ಬೀದರ್ ರವರ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 20/09/08ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾಪ್ರ/08–09/5144.

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 20/09/08ರ ಪತ್ರದಲ್ಲಿ ಬೀದರ್ ಜಿಲ್ಲೆ, ಔರಾದ್ ತಾಲ್ಲೂಕಿನ ಗಣೇಶಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ವಾಗನಗೇರಾ ಮತ್ತು ಮುರ್ಕಿ ಗ್ರಾಮಗಳ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರನ್ವಯ ವಿಶೇಷ ಭೂಸ್ವಾಧೀನಾಧಿಕಾರಿಗಳು (ಕಾರಂಜಾ ಯೋಜನೆ) ಬೀದರ್ ರವರು ಹೊರಡಿಸಿರುವ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ರೂ.68,83,882–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಕೆರೆಯ ಮೂಲ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 04/03/1999
- ಮೂಲ ಪರಿಹಾರ ಧನದ ಐತೀರ್ಪಿನ ದಿನಾಂಕ 26/06/2002

ಮೇಲ್ಕಂಡ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಸೇರಿದ್ದ ವಾಗನಗೇರಾ ಮತ್ತು ಮುರ್ಕಿ ಗ್ರಾಮಗಳ ಸ.ನಂ.ಗಳ ಕೆಲವು ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣ ಸಂಖ್ಯೆ:68/04, 58/04 ಹಾಗೂ 72/04ರಲ್ಲಿ ಮಾನ್ಯ ಬೀದರ್‌ನ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ಆದೇಶಿಸಿದೆ. ಈ ತೀರ್ಪನ್ನು ಉಲ್ಲೇಖಿಸಿ ಈ ಭೂಸ್ವಾಧೀನ ಪ್ರಕರಣದಲ್ಲಿ ಸೇರಿದ್ದ ಈ ಕೆಳಕಂಡ ಇತರೆ ಸ.ನಂ. ಗಳ ಭೂಮಾಲೀಕರು ಅವರ ಜಮೀನುಗಳಿಗೂ ಸಹ ಹೆಚ್ಚಿನ ಪರಿಹಾರ ಧನ ಪಾವತಿಸಲು ಕೋರಿ ಅರ್ಜಿ ಸಲ್ಲಿಸಿದ್ದರ ಮೇರೆಗೆ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕಾರಂಜಾ ಯೋಜನೆ, ಬೀದರ್ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ) ರಡಿ ದಿನಾಂಕ 10/07/08ರಂದು ಹೆಚ್ಚಿನ ಪರಿಹಾರ ಧನದ ಐತೀರ್ಪು ಹೊರಡಿಸಿರುತ್ತಾರೆ. ಈ ಐತೀರ್ಪಿನಲ್ಲಿ ಸೇರಿರುವ ಸ.ನಂ.ವಾರು ಕ್ಷೇತ್ರದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಸ.ನಂ. | ವಿಸ್ತೀರ್ಣ ಎ-ಗುಂ. | ಗ್ರಾಮ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 61/3ಸಿ | 0-08 | ಮುರ್ಕಿ | 63956 |
| 2 | 128/2 | 5-05 | ಮುರ್ಕಿ | 1638866 |
| 3 | 70/4 | 0-05 | ಮುರ್ಕಿ | 39972 |
| 4 | 108/3 | 5-06 | ಮುರ್ಕಿ | 1646860 |
| 5 | 113/3 | 0-17 | ಮುರ್ಕಿ | 135906 |
| 6 | 71/3 | 0-11 | ಮುರ್ಕಿ | 87937 |
| 7 | 102/2,3,7,9,10 | 0-22 | ಮುರ್ಕಿ | 175879 |
| 8 | 77 | 3-00 | ವಾಗನಗೇರಾ | 977212 |
| 9 | 77 | 1-00 | ವಾಗನಗೇರಾ | 325737 |
| 10 | 76/2 | 2-00 | ವಾಗನಗೇರಾ | 651476 |
| 10 | 76/2 | 1-20 | ವಾಗನಗೇರಾ | 488605 |
| 11 | 78/2 | 2-00 | ವಾಗನಗೇರಾ | 651476 |
| | | | ಒಟ್ಟು | **6883882** |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 134 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 2ನೇ ಫೆಬ್ರವರಿ 2009.**

ಬೀದರ್ ಜಿಲ್ಲೆ, ಔರಾದ್ ತಾಲ್ಲೂಕಿನ ಗಣೇಶಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ವಾಗನಗೇರಾ ಮತ್ತು ಮುರ್ಕಿ ಗ್ರಾಮಗಳ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರನ್ವಯ ಬೀದರ್‌ನ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕಾರಂಜಾ ಯೋಜನೆ ರವರು ನೀಡಿರುವ ಐತೀರ್ಪಿನಂತೆ ಪರಿಹಾರ ಧನದ ಮೊತ್ತ ರೂ.68,83,882-00ಗಳನ್ನು (ಅರವತ್ತೆಂಟು ಲಕ್ಷದ ಎಂಭತ್ತಮೂರು ಸಾವಿರದ ಎಂಟುನೂರ ಎಂಭತ್ತೆರಡು ರೂ.ಗಳು ಮಾತ್ರ) ಪ್ರಸ್ತಾವನೆಯಲ್ಲಿ ತಿಳಿಸಿರುವ ಸ.ನಂ.ಗಳಿಗೆ ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008-09ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ 02/09/2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.534

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಹಾವೇರಿ ಜಿಲ್ಲೆ, ಹಾವೇರಿ ತಾಲ್ಲೂಕಿನ ದಿಡಗೂರ ಕೆರೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಹಾವೇರಿಯ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನ ಅನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸಲು ಹಣ ಬಿಡುಗಡೆ ಕುರಿತು.

**ಓದಲಾಗಿದೆ:**
1. ದಿನಾಂಕ 22/11/2008ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/07-08/ 6167.
2. ದಿನಾಂಕ 24/11/08ರಂದು ಅಂತ್ಯಗೊಂಡಿರುವ ಹಾವೇರಿ ಉಪವಿಭಾಗಾಧಿಕಾರಿಗಳ ಪತ್ರ ಸಂಖ್ಯೆ: ಭೂಸ್ವಾ/ಇಪಿ 57/91ರಿಂದ60/91.

**ಪ್ರಸ್ತಾವನೆ:**

ಹಾವೇರಿ ಜಿಲ್ಲೆ, ಹಾವೇರಿ ತಾಲ್ಲೂಕಿನ ದಿಡಗೂರು ಕೆರೆಗಾಗಿ ಸ್ವಾಧೀನಪಡಿಸಿ ಕೊಳ್ಳಲಾಗಿದ್ದ ತಿಮ್ಮಾಪುರ ಗ್ರಾಮದ ಸ.ನಂ.57/1ಬಿ ಯ 5 ಎಕರೆ 11 ಗುಂಟೆ, 53/1+2ಬಿ ನ 3 ಎಕರೆ 22 ಗುಂಟೆ, 57/1ಎ ನ 3 ಎಕರೆ 12 ಗುಂಟೆ ಮತ್ತು 61/1ಎ+ಬಿ ನ 2 ಎಕರೆ 14 ಗುಂಟೆ ಜಮೀನಿಗೆ ಹಾವೇರಿಯ ಸಿವಿಲ್ ನ್ಯಾಯಾಲಯವು(ಹಿರಿಯ ಶ್ರೇಣಿ) ಜಾರಿ ದಾವೆ ಸಂಖ್ಯೆ:57/91 ರಿಂದ 60/91ರಲ್ಲಿ ದಿನಾಂಕ 07/01/2008 ರಂದು ನೀಡಿದ ಆದೇಶದಂತೆ ಭೂಮಾಲೀಕರಿಗೆ ಹೆಚ್ಚುವರಿ ಪರಿಹಾರ ಧನ ಪಾವತಿಸಲು ರೂ.77,79,197-00 ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ಮುಖ್ಯ ಇಂಜಿನಿಯರ್ ಹಾಗೂ ಉಪ ವಿಭಾಗಾಧಿಕಾರಿ ಹಾವೇರಿ ಇವರು ಕೋರಿರುತ್ತಾರೆ.

ನ್ಯಾಯಾಲಯ ಪ್ರಕರಣಗಳಲ್ಲಿ ಪ್ರಸ್ತಾಪಿಸಿರುವ ಜಮೀನುಗಳ ಸ್ವಾಧೀನಕ್ಕೆ ಭೂಸ್ವಾಧೀನ ಕಾಯ್ದೆಯಡಿ4(1)ರ ಅಧಿಸೂಚನೆಯನ್ನು ದಿನಾಂಕ 30/04/87ರಂದು ಮತ್ತು ಪರಿಹಾರ ಧನದ ಐತೀರ್ಪನ್ನು ದಿನಾಂಕ 30/10/88 ರಂದು ಹೊರಡಿಸಲಾಗಿದೆ. ಸ್ವಾಧೀನಕ್ಕೊಳಪಟ್ಟ ಜಮೀನುಗಳ ಕಬ್ಜೆಯನ್ನು 4(1)ರ ಅಧಿಸೂಚನೆಯ ಪೂರ್ವದಲ್ಲಿ ಅಂದರೆ ದಿನಾಂಕ 04/10/60ರಲ್ಲಿ ಇಲಾಖೆಯ ವಶಕ್ಕೆ ಪಡೆಯಲಾಗಿದೆ. ಪರಿಹಾರ ಧನದ ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರ ಧನ ನೀಡುವಂತೆ ಭೂಸ್ವಾಧೀನ ಕಾಯ್ದೆ 18(1)ರನ್ವಯ ಹಾವೇರಿಯ ಸಿವಿಲ್ ನ್ಯಾಯಾಲಯದಲ್ಲಿ ದಾಖಲಿಸಿದ್ದ ಎಲ್.ಎ.ಸಿ ಸಂಖ್ಯೆ:34/90, 22/90, 29/90 ಮತ್ತು 28/90ರಲ್ಲಿ ನ್ಯಾಯಾಲಯವು ಪ್ರತಿ ಎಕರೆಗೆ ರೂ.25,000/-ಗಳಂತೆ ಭೂಮೌಲ್ಯವನ್ನು ಹೆಚ್ಚಿಸಿ ಈ ಮೊತ್ತದ ಮೇಲೆ ಶೇ.30ರಷ್ಟು ಸೊಲೇಷಿಯಂ, ಶೇ.12ರಷ್ಟು ಹೆಚ್ಚುವರಿ ಮಾರುಕಟ್ಟೆ ದರವನ್ನು 4(1)ರ ಅಧಿಸೂಚನೆ ದಿನಾಂಕದಿಂದ ಐತೀರ್ಪಿನ ದಿನಾಂಕದವರೆಗೆ ಹಾಗೂ ಈ ಹೆಚ್ಚುವರಿ ಪರಿಹಾರ ಧನದ ಮೇಲೆ ಬಡ್ಡಿಯನ್ನು ಕಬ್ಜೆ ದಿನಾಂಕದಿಂದ ಮೊದಲನೆ ವರ್ಷಕ್ಕೆ ಶೇ.9ರಂತೆ ನಂತರದ ಅವಧಿಗೆ ಶೇ.15ರಂತೆ ಪಾವತಿಸಲು ದಿನಾಂಕ 15/11/90ರಲ್ಲಿ ತೀರ್ಪು ನೀಡಿತ್ತು.

ಸಿವಿಲ್ ನ್ಯಾಯಾಲಯದ ತೀರ್ಪುಗಳ ವಿರುದ್ಧ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಕ್ರಮವಾಗಿ ಎಂಎಫ್‌ಎ ಸಂಖ್ಯೆ:1142/91, 790/91, 792/91 ಮತ್ತು 791/91ರಲ್ಲಿ ಪ್ರಶ್ನಿಸಲಾಗಿತ್ತು. ಮಾನ್ಯ ಉಚ್ಚ ನ್ಯಾಯಾಲಯವು ಈ ಪ್ರಕರಣಗಳಲ್ಲಿ ದಿನಾಂಕ 03/01/94ರಂದು ನೀಡಿದ ತೀರ್ಪಿನಲ್ಲಿ ಸಿವಿಲ್ ನ್ಯಾಯಾಲಯದ ತೀರ್ಪಿನಲ್ಲಿ ಆದೇಶಿಸಿದ್ದ ಶೇ.12ರಷ್ಟು ಮಾರುಕಟ್ಟೆ ದರವನ್ನು ತಳ್ಳಿ ಹಾಕಿ ಇನ್ನುಳಿದ ಎಲ್ಲಾ ಅಂಶಗಳನ್ನು ಪುರಸ್ಕರಿಸಿದೆ. ಉಚ್ಚ ನ್ಯಾಯಾಲಯದ ಈ ತೀರ್ಪಿನಂತೆ ಭೂಮಾಲೀಕರಿಗೆ ಪರಿಹಾರ ಧನವನ್ನು ಪಾವತಿಸಲಾಗಿದೆ. ಆದರೆ, ಇದೇ ಪ್ರಕರಣಗಳಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 29/03/96ರಂದು ಹೊರಡಿಸಿದ ತಿದ್ದಪಡಿ ತೀರ್ಪಿನಲ್ಲಿ ಹೆಚ್ಚುವರಿ ಮಾರುಕಟ್ಟೆ ದರವನ್ನು ಸ್ವಾಧೀನಕ್ಕೊಳಪಟ್ಟ ಜಮೀನುಗಳ ಕಬ್ಜೆ ದಿನಾಂಕದಿಂದ ಪರಿಹಾರ ಧನದ ಐತೀರ್ಪಿನ ದಿನಾಂಕದವರೆಗೆ ಪಾವತಿಸುವಂತೆ ಆದೇಶಿಸಿತ್ತು. ಈ ತೀರ್ಪಿನ ವಿರುದ್ಧ ಕಾನೂನು ಇಲಾಖೆಯು ಆದೇಶ ಸಂಖ್ಯೆ:ಲಾ 2482 ಎಲ್‌ಬಿಎಸ್ 90, ದಿನಾಂಕ 25/09/99ರಲ್ಲಿ ಮೇಲ್ಮನವಿ ಸಲ್ಲಿಸಲು ಉಪ ವಿಭಾಗಾಧಿಕಾರಿ ಮತ್ತು ವಿಶೇಷ ಭೂಸ್ವಾಧೀನಾಧಿಕಾರಿಗಳು, ಹಾವೇರಿ ಇವರನ್ನು ವ್ಯಾಜ್ಯ ನಿರ್ವಹಣಾಧಿಕಾರಿ ಹಾಗೂ ಶಪಥಾಧಿಕಾರಿ ಯನ್ನಾಗಿ ನೇಮಿಸಿ ಆದೇಶಿಸಿತ್ತು. ಅದರಂತೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣ ಸಂಖ್ಯೆ:ಸಿವಿಲ್ ಪಿಟಿಷನ್ ಸಂಖ್ಯೆ:1362/99ನ್ನು ದಾಖಲಿಸಲಾಗಿತ್ತು. ಆದರೆ, ಸಕಾಲದಲ್ಲಿ ಮೇಲ್ಮನವಿ ಸಲ್ಲಿಸಲು ಕ್ರಮ ಕೈಗೊಳ್ಳದೇ ಇದ್ದುದರಿಂದ, ಪ್ರಕರಣವು ವಿಳಂಬದ ಕಾರಣ ದಿನಾಂಕ 03/07/01ರ ತೀರ್ಪಿನಲ್ಲಿ ವಜಾಗೊಂಡಿದೆ.

ಉಚ್ಚ ನ್ಯಾಯಾಲಯದಲ್ಲಿ ಪ್ರಕರಣವು ವಜಾಗೊಂಡಿದ್ದರಿಂದ, ಎಂ.ಎಫ್.ಎ ಸಂಖ್ಯೆ: 1142/91, 790/91, 792/91 ಮತ್ತು 791/91ರ ತಿದ್ದುಪಡಿ ತೀರ್ಪು ದಿನಾಂಕ 29/03/96ರನ್ವಯ ಪರಿಹಾರ ಧನಕ್ಕಾಗಿ ಸಿವಿಲ್ ನ್ಯಾಯಾಲಯ, ಹಾವೇರಿ ಇಲ್ಲಿ ಭೂಮಾಲೀಕರು ಜಾರಿ ದಾವೆ ಸಂಖ್ಯೆ:57/91 ರಿಂದ 61/91ನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಮಾನ್ಯ ನ್ಯಾಯಾಲಯವು ಭೂಸ್ವಾಧೀನಾಧಿಕಾರಿಗಳು ಸಲ್ಲಿಸಿದ್ದ ಲೆಕ್ಕಾಚಾರ ತ:ಖ್ತೆಯನ್ನು ತಿರಸ್ಕರಿಸಿದ್ದರಿಂದ, ಈ ಪ್ರಕರಣಗಳ ತೀರ್ಪುಗಳ ವಿರುದ್ಧ ಪುನ: ದಾಖಲಿಸಿದ್ದ ರಿಟ್ ಅರ್ಜಿ ಸಂಖ್ಯೆ:15169/06, 15170/06, 15171/06 ಮತ್ತು 15172/06ರಲ್ಲಿ

ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 07/06/07ರಂದು ನೀಡಿದ ಸಾಮಾನ್ಯ ತೀರ್ಪಿನಲ್ಲಿ ಸೊಲೇಷಿಯಂ ಮತ್ತು ಹೆಚ್ಚುವರಿ ಮಾರುಕಟ್ಟೆ ದರದ ಮೇಲೆ ಗುರುಪ್ರೀತ್ ಸಿಂಗ್ ವಿರುದ್ಧ ಯೂನಿಯನ್ ಆಫ್ ಇಂಡಿಯಾ ಪ್ರಕರಣದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನೀಡಿರುವ ಅನುಪಾತದಲ್ಲಿ ಲೆಕ್ಕ ಹಾಕಿ ಪ್ರಕರಣವನ್ನು ಇತ್ಯರ್ಥಗೊಳಿಸಲು ಪ್ರಕರಣವನ್ನು ಪುನ: ಸಿವಿಲ್ ನ್ಯಾಯಾಲಯಕ್ಕೆ ಹಿಂದಿರುಗಿಸಿತ್ತು.

ಉಚ್ಚ ನ್ಯಾಯಾಲಯದ ತೀರ್ಪಿನಂತೆ ವಾದಿ ಮತ್ತು ಪ್ರತಿವಾದಿಗಳಿಬ್ಬರು ಸಿವಿಲ್ ನ್ಯಾಯಾಲಯದಲ್ಲಿ ಲೆಕ್ಕಾಚಾರ ತ:ಖ್ತೆಗಳನ್ನು ಸಲ್ಲಿಸಿದ್ದು, ಮಾನ್ಯ ಸಿವಿಲ್ ನ್ಯಾಯಾಲಯವು ಜಾರಿ ದಾವೆ ಸಂಖ್ಯೆ:57/91 ರಿಂದ 60/91ರಲ್ಲಿ ದಿನಾಂಕ 07/01/08ರಂದು ನೀಡಿದ ತೀರ್ಪಿನಲ್ಲಿ ಉಪ ವಿಭಾಗಾಧಿಕಾರಿಗಳು ಸಲ್ಲಿಸಿದ್ದ ಲೆಕ್ಕಾಚಾರ ತ:ಖ್ತೆಯನ್ನು ತಿರಸ್ಕರಿಸಿ ಭೂಮಾಲೀಕರ ಪರ ಸಲ್ಲಿಸಿದ ಲೆಕ್ಕಾಚಾರ ತ:ಖ್ತೆಯನ್ನು ಒಪ್ಪಿ ಅದರಂತೆ ಪಾವತಿಸಲು ಆದೇಶಿಸಿದೆ.

ಸಕಾಲದಲ್ಲಿ ಹಣ ಪಾವತಿಸದೇ ಇದ್ದುದರಿಂದ, ಮಾನ್ಯ ಹಾವೇರಿಯ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯವು ಜಾರಿ ದಾವೆಗಳಲ್ಲಿ ಜಪ್ತಿ ಆದೇಶ ಹೊರಡಿಸಿರುತ್ತದೆ. ಈ ಜಪ್ತಿ ಆದೇಶಗಳ ವಿರುದ್ಧ ತಡೆಯಾಜ್ಞೆ ಪಡೆಯಲು ಜಪ್ತಿ ಮೊತ್ತವನ್ನು ನ್ಯಾಯಾಲಯದಲ್ಲಿ ಪಾವತಿ ಮಾಡಿ ಮೇಲ್ಮನವಿ ಸಲ್ಲಿಸಬಹುದಾಗಿದೆಯೆಂದು ಕಾನೂನು ಇಲಾಖೆಯು ಟಿಪ್ಪಣಿ ಸಂಖ್ಯೆ:ಲಾ 33 ಓಪಿಎನ್ 09, ದಿನಾಂಕ 30/01/09ರಂದು ಅಭಿಪ್ರಾಯ ನೀಡಿದೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 2ನೇ ಫೆಬ್ರವರಿ 2009.**

ಹಾವೇರಿ ಜಿಲ್ಲೆ, ಹಾವೇರಿ ತಾಲ್ಲೂಕಿನ ದಿಡಗೂರ ಕೆರೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಹಾವೇರಿಯ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ/ಜಾರಿದಾವೆ ಪ್ರಕರಣಗಳಲ್ಲಿ ನೀಡಿರುವ ತೀರ್ಪಿನ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸುವ ಬಗ್ಗೆ ಉಪ ವಿಭಾಗಾಧಿಕಾರಿಗಳು ಮತ್ತು ಭೂಸ್ವಾಧೀನಾಧಿಕಾರಿಗಳು, ಹಾವೇರಿ ಇವರು ಪುನರ್ ಪರಿಶೀಲಿಸುವ ಷರತ್ತಿಗೊಳಪಟ್ಟು ಡಿಕ್ರಿ ಹಣದ ಮೊತ್ತ ರೂ.77,79,197–00 ಗಳನ್ನು(ಎಪ್ಪತ್ತೇಳು ಲಕ್ಷದ ಎಪ್ಪತ್ತೊಂಭತ್ತು ಸಾವಿರದ ನೂರ ತೊಂಭತ್ತೇಳು ರೂಪಾಯಿಗಳು ಮಾತ್ರ) ನ್ಯಾಯಾಲಯದಲ್ಲಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ 02/09/2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.533

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಬಳ್ಳಾರಿ ಜಿಲ್ಲೆ, ಸಿರಗುಪ್ಪ ತಾಲ್ಲೂಕು, ದದೂರು ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆಯ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 29 ಏನೀಯೋ 2008, ದಿನಾಂಕ 31/03/2008.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 19/12/08ರ ಪತ್ರ ಸಂಖ್ಯೆ:ಮುಇಂ/ಸನೀ(ಉ)/ಬಿಜೆಪಿ/ಟಿಬಿ–12/ 2008–09/6633.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆ, ಸಿರಗುಪ್ಪ ತಾಲ್ಲೂಕು, ದದೂರು ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆಯ 100.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 31/03/2008ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಆದೇಶ ಸಂಖ್ಯೆ:4431, ದಿನಾಂಕ 07/08/2008ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್ ಆಹ್ವಾನಿಸಿದ್ದು, ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಬಳ್ಳಾರಿ ಜಿಲ್ಲಾ ಟೆಂಡರ್ ಬುಲೆಟಿನ್ | ದಿ:18/08/2008 |
| 2 | ಕರ್ನಾಟಕ ರಾಜ್ಯ ಪತ್ರ | ದಿ:21/08/2008 |
| 3 | ಕನ್ನಡಪ್ರಭಾ ದಿನ ಪತ್ರಿಕೆ | ದಿ:21/09/2008 |
| 4 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿ:22/09/2008 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ ಪ್ರಕಟಣೆಯನ್ನು ದಿನಾಂಕ 27/09/08ರಂದು ಹೊರಡಿಸಲಾಗಿದೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 4 ಜನ ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ನಿಗಧಿತ ದಿನದಂದು ಭರ್ತಿ ಮಾಡಿದ ಟೆಂಡರ್‌ನ್ನು ಸಲ್ಲಿಸಿರುತ್ತಾರೆ. ಈ ಗುತ್ತಿಗೆದಾರರ ಆರ್ಥಿಕ ಬಿಡ್‌ನ್ನು ದಿನಾಂಕ 06/11/08ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.94,63,182/– |
| ಪಿ.ಎಸ್.ಸಿ. ಪೈಮುಗಳಿಗೆ ಪ್ರಸಕ್ತ ಮಾರುಕಟ್ಟೆ ದರಗಳನ್ನು ಪರಿಗಣಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.1,19,57,025/– |

| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಎಂ.ಸಿದ್ದರಾಮನಗೌಡ, 1ನೇ ದರ್ಜೆ ಗುತ್ತಿಗೆದಾರರು, ಬಳ್ಳಾರಿ | ರೂ.1,39,25,850/– | 47.16 ಹೆಚ್ಚು | 16.46 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಂ. ಸಿದ್ದರಾಮನಗೌಡ, 1ನೇ ದರ್ಜೆ ಗುತ್ತಿಗೆದಾರರು, ಬಳ್ಳಾರಿ ಇವರು ನಮೂದಿಸಿರುವ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 16.46ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 19/12/08ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23/12/08ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರಿಗೆ ಅವರು ಸೂಚಿಸಿರುವ ದರಗಳು ಪ್ರಸಕ್ತ ದರ ಪಟ್ಟಿಗೆ ಹೋಲಿಸಿದಾಗ ಶೇ.16.46ರಷ್ಟು ಹೆಚ್ಚಾಗಿರುವುದರಿಂದ, ಇಷ್ಟೊಂದು ಹೆಚ್ಚಿನ ಮೊತ್ತಕ್ಕೆ ಒಪ್ಪಲು ಸಾಧ್ಯವಿಲ್ಲವೆಂದು ದರಗಳನ್ನು ಕಡಿಮೆ ಮಾಡುವಂತೆ ತಿಳಿಸಲಾಯಿತು. ಇದಕ್ಕೆ ಗುತ್ತಿಗೆದಾರರು ಪ್ರತಿಕ್ರಯಿಸುತ್ತಾ, ಪ್ರಸ್ತುತ ಸಿಮೆಂಟ್ ಮತ್ತು ಉಕ್ಕಿನ ದರಗಳನ್ನು ಪರಿಗಣಿಸಿದಾಗ, ಈ ಟೆಂಡರ್‌ನಲ್ಲಿ ನಮೂದಿಸಿರುವ ದರಗಳು ಸಮಂಜಸವಾಗಿರುವುದಾಗಿ ತಿಳಿಸಿದರು. ಗುತ್ತಿಗೆದಾರರ ಮನವಿಯನ್ನು ಪರಿಗಣಿಸಿ ಪರಿಷ್ಕೃತ ಟೆಂಡರ್ ಮೊತ್ತ ರೂ.1,19,57,025–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,36,90,794–00ಗಳಿಗೆ ಕಾಮಗಾರಿಯನ್ನು ಶ್ರೀ ಎಂ.ಸಿದ್ದರಾಮನಗೌಡ, 1ನೇ ದರ್ಜೆ ಗುತ್ತಿಗೆದಾರರು, ಬಳ್ಳಾರಿ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಿದೆ. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆ. ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 70 ಏನೀಯೋ 2008, ಬೆಂಗಳೂರು, ದಿನಾಂಕ 2ನೇ ಫೆಬ್ರವರಿ 2009**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಸಿರಗುಪ್ಪ ತಾಲ್ಲೂಕು, ದದೂರು ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಗಣಿಸಿದ ಪರಿಷ್ಕೃತ ಟೆಂಡರಿಗೆ ಇಡಲಾದ ಮೊತ್ತ ರೂ.1,19,57,025–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,36,90,794–00ಗಳಿಗೆ (ಒಂದು ಕೋಟಿ ಮೂವತ್ತಾರು ಲಕ್ಷದ ತೊಂಭತ್ತು ಸಾವಿರದ ಏಳುನೂರ ತೊಂಭತ್ತಾನ್ಲ್ಕು ರೂ.ಗಳು ಮಾತ್ರ) ಶ್ರೀ ಎಂ.ಸಿದ್ದರಾಮನಗೌಡ, 1ನೇ ದರ್ಜೆ ಗುತ್ತಿಗೆದಾರರು, ಬಳ್ಳಾರಿ ರವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.532

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು ತ್ಯಾಜುವಳ್ಳಿ ಗ್ರಾಮದ ಹತ್ತಿರ ಅಂಬ್ಲಿಕಟ್ಟೆ ಹೊಸಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ನಯೋಕಾ 2007, ದಿನಾಂಕ 13/05/2008.
2. ದಿನಾಂಕ 03/12/08ರ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದ ಸಂಖ್ಯೆ: ಮುಸ(ದ)/ತಾಂ–3/ಸಇಂ–8/ಶಿವಮೊಗ್ಗ/ತ್ಯಾಜುವಳ್ಳಿ/ಅಂಬ್ಲಿಕಟ್ಟೆ ಹೊಸಕೆರೆ/ಟೆಂಡರ್/ 2008–09/4322.

**ಪ್ರಸ್ತಾವನೆ:**

ಹೆಚ್ಚಿನ ಆತ್ಮಹತ್ಯೆ ವರದಿಯಾಗಿರುವ ರಾಜ್ಯದ ಜಿಲ್ಲೆಗಳಲ್ಲಿ ರೈತರ ಪುರ್ನವಸತಿಗಾಗಿ ವಿಶೇಷ ಪ್ಯಾಕೇಜ್‌ನಡಿ 162 ಕಾಮಗಾರಿಗಳನ್ನು ಕೈಗೊಳ್ಳಲು ಮೇಲೆ (1)ರಲ್ಲಿ ಓದಲಾದ ದಿನಾಂಕ 13/05/08ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ. ಈ ಆದೇಶದಲ್ಲಿ 79.00 ಲಕ್ಷ ರೂ.ಗಳ ಅಂದಾಜು ಮೊತ್ತದಲ್ಲಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು ತ್ಯಾಜುವಳ್ಳಿ ಗ್ರಾಮದ ಹತ್ತಿರ ಅಂಬ್ಲಿಕಟ್ಟೆ ಹೊಸಕೆರೆ ನಿರ್ಮಾಣ ಕಾಮಗಾರಿಯು ಸಹ ಸೇರಿದೆ. ಈ ಕಾಮಗಾರಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಸಿ.ಇ.ಆರ್. ಸಂಖ್ಯೆ:81/2008–09ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | ದಿ:05/07/2008 |
| 2 | ಹಿಂದೂ ಆಂಗ್ಲ ದಿನಪತ್ರಿಕೆ | ದಿ:24/07/2008 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ ಅಂತಿಮವಾಗಿ ದಿನಾಂಕ 04/11/08ರಂದು ಹೊರಡಿಸಲಾಗಿದೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 23 ಜನ ಗುತ್ತಿಗೆದಾರರ ಪೈಕಿ 4 ಜನ ಗುತ್ತಿಗೆದಾರರು ಮಾತ್ರ ನಿಗಧಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 14/11/2008ರಂದು ತೆರೆಯಲಾಗಿದೆ. ಅದರಲ್ಲಿ ಅರ್ಹರಾಗಿದ್ದ ಇಬ್ಬರು ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ದಿನಾಂಕ 20/11/08ರಂದು ತೆರೆಯಲಾಗಿದ್ದು, ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳು ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | ರೂ.83,32,483/– |
|---|---|---|---|
| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳು ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಕೆ.ಶ್ರೀನಿವಾಸ್, 1ನೇ ದರ್ಜೆ ಗುತ್ತಿಗೆದಾರರು, ಶಿವಮೊಗ್ಗ | ರೂ.1,08,16,864/– | 29.82 ಹೆಚ್ಚು |
| 2 | ಹೆಚ್.ಜಿ.ಬಸವರಾಜಪ್ಪ, 1ನೇ ದರ್ಜೆ ಗುತ್ತಿಗೆದಾರರು, ಚನ್ನಗಿರಿ | ರೂ.1,16,15,226/– | 39.40 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಕೆ. ಶ್ರೀನಿವಾಸ್, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.1,08,16,864–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ

ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 29.82ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 03/12/08ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳು ಹೆಚ್ಚೆಂದು ಕಂಡು ಬಂದ ಹಿನ್ನೆಲೆಯಲ್ಲಿ ಈ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23/12/2008ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಟೆಂಡರಿಗಿಡಲಾದ ಮೊತ್ತ ರೂ.83,32,483–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.95,40,693–00ಗಳಿಗೆ ಕಾಮಗಾರಿಯನ್ನು ಶ್ರೀ ಕೆ.ಶ್ರೀನಿವಾಸ್, 1ನೇ ದರ್ಜೆ ಗುತ್ತಿಗೆದಾರರು, ಶಿವಮೊಗ್ಗ ಇವರಿಗೆ ವಹಿಸಲು ಸಭೆಯಲ್ಲಿ ನಿರ್ಧರಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 48 ಹೊಕೆನಿ 2008, ಬೆಂಗಳೂರು, ದಿನಾಂಕ 2ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು ತ್ಯಾಜುವಳ್ಳಿ ಗ್ರಾಮದ ಹತ್ತಿರ ಅಂಬ್ಲಿಕಟ್ಟೆ ಹೊಸಕೆರೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಟೆಂಡರಿಗೆ ಇಡಲಾದ ಮೊತ್ತ ರೂ.83,32,483–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.95,40,693–00ಗಳಿಗೆ (ತೊಂಭತ್ತೈದು ಲಕ್ಷದ ನಲವತ್ತು ಸಾವಿರದ ಆರುನೂರ ತೊಂಭತ್ತ್ಮೂರು ರೂ.ಗಳು ಮಾತ್ರ) ಶ್ರೀ ಕೆ.ಶ್ರೀನಿವಾಸ್, 1ನೇ ದರ್ಜೆ ಗುತ್ತಿಗೆದಾರರು, ಶಿವಮೊಗ್ಗ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 531

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕು ಹಾರಂಬಳ್ಳಿ ಮತ್ತು ಕಲ್ಲೂರ ಗ್ರಾಮಗಳ ಹತ್ತಿರ ಕುಮುದ್ವತಿ ನದಿಗೆ ಅಡ್ಡಲಾಗಿ ತಲಾ ಒಂದೊಂದು ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ನಯೋಕಾ 2007, ದಿನಾಂಕ 13/05/2008.
2. ದಿನಾಂಕ 22/12/08ರ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದ ಸಂಖ್ಯೆ:ಮುಸ(ದ)/ತಾಂ–3/ಸಇಂ–8/ಶಿವಮೊಗ್ಗ/ ಟೆಂಡರ್/2008–09/4494.

**ಪ್ರಸ್ತಾವನೆ:**

ಹೆಚ್ಚಿನ ಆತ್ಮಹತ್ಯೆ ವರದಿಯಾಗಿರುವ ರಾಜ್ಯದ ಜಿಲ್ಲೆಗಳಲ್ಲಿ ರೈತರ ಪುನರ್ವಸತಿಗಾಗಿ ವಿಶೇಷ ಪ್ಯಾಕೇಜ್‌ನಡಿ 162 ಕಾಮಗಾರಿಗಳನ್ನು ಕೈಗೊಳ್ಳಲು ಮೇಲೆ (1)ರಲ್ಲಿ ಓದಲಾದ ದಿನಾಂಕ 13/05/08ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ. ಈ ಆದೇಶದಲ್ಲಿ 101.00 ಲಕ್ಷ ರೂ.ಗಳ ಅಂದಾಜು ಮೊತ್ತದಲ್ಲಿ ಹೊಸನಗರ ತಾಲ್ಲೂಕು, ಕಲ್ಲೂರ ಗ್ರಾಮದ ಬಳಿ ಕುಮುದ್ವತಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿ ಹಾಗೂ 97.45 ಲಕ್ಷ ರೂ.ಗಳ ಹೊಸನಗರ ತಾಲ್ಲೂಕು, ಹಾರಂಬಳ್ಳಿ ಗ್ರಾಮದ ಬಳಿ ಕುಮುದ್ವತಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಗಳು ಸಹ ಸೇರಿವೆ.

ಈ ಕಾಮಗಾರಿಗಳನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | ದಿ:10/10/2008 |
| 2 | ರಾಜ್ಯ ಟೆಂಡರ್ ಬುಲೆಟಿನ್ | ದಿ:18/10/2008 |
| 3 | ಕನ್ನಡಪ್ರಭಾ ದಿನಪತ್ರಿಕೆ ಹಾಗೂ ಹಿಂದೂ ಆಂಗ್ಲ ದಿನಪತ್ರಿಕೆಗಳು | ದಿ:01/11/2008 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ ಅಂತಿಮವಾಗಿ ದಿನಾಂಕ 03/11/08ರಂದು ಹೊರಡಿಸಲಾಗಿದೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 5 ಜನ ಗುತ್ತಿಗೆದಾರರು ನಿಗಧಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 11/12/2008ರಂದು ತೆರೆಯಲಾಗಿದೆ. ಅದರಲ್ಲಿ ಅರ್ಹರಾಗಿದ್ದ ಇಬ್ಬರು ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ದಿನಾಂಕ 12/12/08ರಂದು ತೆರೆಯಲಾಗಿದ್ದು, ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.1,96,37,797/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.1,93,97,022/- |

| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಜಿ.ಓ. ರಾಜು, 1ನೇ ದರ್ಜೆ ಗುತ್ತಿಗೆದಾರರು, ದಾವಣಗೆರೆ | ರೂ.2,57,25,758/- | 31.00 ಹೆಚ್ಚು | 32.63 ಹೆಚ್ಚು |
| 2 | ಜಿ. ಗೋಕುಲಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಕುಂದಾಪುರ | ರೂ.2,66,74,486/- | 35.83 ಹೆಚ್ಚು | 37.52 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ: 1ರಲ್ಲಿರುವ ಶ್ರೀ ಜಿ.ಓ. ರಾಜು, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.2,57,25,758-00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 32.63ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 22/12/08ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳು ಹೆಚ್ಚೆಂದು ಕಂಡು ಬಂದ ಹಿನ್ನೆಲೆಯಲ್ಲಿ ಈ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23/12/2008ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಟೆಂಡರಿಗಿಡಲಾದ ಮೊತ್ತ ರೂ.1,93,97,022-00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,22,09,590-00ಗಳಿಗೆ ಕಾಮಗಾರಿಯನ್ನು ಶ್ರೀ ಜಿ.ಓ. ರಾಜು, 1ನೇ ದರ್ಜೆ ಗುತ್ತಿಗೆದಾರರು, ದಾವಣಗೆರೆ ಇವರಿಗೆ ವಹಿಸಲು ಸಭೆಯಲ್ಲಿ ನಿರ್ಧರಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 135 ಅಪಿಬಂ 2008, ಬೆಂಗಳೂರು, ದಿನಾಂಕ 2ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕು ಕಲ್ಲೂರ ಹಾಗೂ ಹಾರಂಬಳ್ಳಿ ಗ್ರಾಮದ ಹತ್ತಿರ ಕುಮುದ್ವತಿ ನದಿಗೆ ಅಡ್ಡಲಾಗಿ ತಲಾ ಒಂದೊಂದು ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಟೆಂಡರಿಗೆ ಇಡಲಾದ ಮೊತ್ತ ರೂ.1,93,97,022-00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,22,09,590-00ಗಳಿಗೆ (ಎರಡು ಕೋಟಿ ಇಪ್ಪತ್ತೆರಡು ಲಕ್ಷದ ಒಂಭತ್ತು ಸಾವಿರದ ಐನೂರ ತೊಂಭತ್ತು ರೂ.ಗಳು ಮಾತ್ರ) ಶ್ರೀ ಜಿ.ಓ.ರಾಜು, 1ನೇ ದರ್ಜೆ ಗುತ್ತಿಗೆದಾರರು, ದಾವಣಗೆರೆ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.530

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)